# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| 1 ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1444 |
| 2 ಸದಸ್ಯರ ಹೆಸರು | : | ಶ್ರೀ ಸಿ.ಎಂ. ಇಬ್ರಾಹಿಂ (ವಿಧಾನಸಭೆಯಿಂದ ಚುನಾಯಿತರಾದವರು) |
| 3 ಉತ್ತರಿಸುವ ದಿನಾಂಕ | : | 10-03-2022 |
| 4 ಉತ್ತರಿಸುವವರು | : | ಮುಖ್ಯಮಂತ್ರಿಗಳು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ನಗರದ ವಾಣಿಜ್ಯ ವಹಿವಾಟಿನ ಕೇಂದ್ರ ಸ್ಥಳಗಳಲ್ಲಿ ಒಂದಾದ ಬಿವಿಕೆ ಅಯ್ಯಂಗಾರ್ ರಸ್ತೆ ಹಾಗೂ ಒಳರಸ್ತೆಗಳಲ್ಲಿ ನಿತ್ಯವೂ ಕೋಟ್ಯಾಂತರ ರೂಪಾಯಿಗಳ ವಹಿವಾಟು ನಡೆಯುವ ರಸ್ತೆಯು ಹದಗೆಟ್ಟಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಸರ್ಕಾರ ತೆಗೆದು ಕೊಂಡಿರುವ ಕ್ರಮಗಳೇನು; | ಬೆಂಗಳೂರು ನಗರದ ವಾಣಿಜ್ಯ ವಹಿವಾಟಿನ ಕೇಂದ್ರ ಸ್ಥಳಗಳಲ್ಲಿ ಒಂದಾದ ಬಿವಿಕೆ ಅಯ್ಯಂಗಾರ್ ರಸ್ತೆಯಲ್ಲಿ ನೀರು ಸರಬರಾಜು / ಒಳಚರಂಡಿ ಕೊಳವೆ ಅಳವಡಿಸಲು ಬೆಂಗಳೂರು ಜಲಮಂಡಳಿಯು ರಸ್ತೆ ಕತ್ತರಿಸಿರುವುದರಿಂದ ಮತ್ತು ಬೃಹತ್ ನೀರುಗಾಲುವೆ ಶಾಖೆಯಿಂದ ನೀರುಗಾಲುವೆ ಅಭಿವೃದ್ಧಿ ಕಾಮಗಾರಿ ಕೈಗೊಂಡಿರುವುದರಿಂದ ರಸ್ತೆಯು ಹಾಳಾಗಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ.<br><br>ಸರ್ಕಾರದ ಆದೇಶ ಸಂಖ್ಯೆ: ನಅಇ 185 ಎಂಎನ್‌ವೈ 2017, ದಿನಾಂಕ: 26.12.2017ರಲ್ಲಿ 2017-18ನೇ ಸಾಲಿನಲ್ಲಿ ಬೆಂಗಳೂರಿಗೆ ವಿಶೇಷ ಮೂಲಭೂತ ಸೌಕರ್ಯಕ್ಕೆ ಬಂಡವಾಳ ಬೆಂಬಲ ಯೋಜನೆಯಡಿ ಒದಗಿಸಿರುವ ರೂ.2191.00 ಕೋಟಿಗಳ ಅನುದಾನದ ಅಡಿಯಲ್ಲಿ ಕೈಗೊಳ್ಳುವ ಕೆಲವು ಕಾಮಗಾರಿಗಳ ಕ್ರಿಯಾ ಯೋಜನೆಗೆ ಅನುಮೋದನೆ ನೀಡಿದ್ದು, ಸದರಿ ಆದೇಶದ ಅನುಬಂಧ-2ರ "Tender SURE Roads" ಕ್ರಿಯಾಯೋಜನೆ ಪಟ್ಟಿಯ ಕ್ರಮ ಸಂಖ್ಯೆ: 17 ರಲ್ಲಿ "BVK Iyengar Road -KG Road to Mysore Road" 1.20 ಕಿ.ಮೀ ಉದ್ದದ ಕಾಮಗಾರಿಗೆ ರೂ.12.00 ಕೋಟಿಗಳ ಅನುದಾನವನ್ನು ನಿಗಧಿಪಡಿಸಲಾಗಿರುತ್ತದೆ.<br><br>ತದನಂತರದಲ್ಲಿ, 2017-18ನೇ ಸಾಲಿನಲ್ಲಿ ವಿಶೇಷ ಮೂಲಭೂತ ಸೌಕರ್ಯಕ್ಕೆ ಬಂಡವಾಳ ಬೆಂಬಲ ಯೋಜನೆಯ ಅನುಬಂಧ-2ರ "Tender SURE Roads" ಯೋಜನೆಯನ್ನು ಬೆಂಗಳೂರು ಸ್ಮಾರ್ಟ್ ಸಿಟಿ ಲಿಮಿಟೆಡ್ ವತಿಯಿಂದ ಅನುಷ್ಠಾನಗೊಳಿಸಲು ಸರ್ಕಾರವು ತೀರ್ಮಾನಿಸಿ, ಈ ಟೆಂಡರ್ ಶ್ಯೂರ್ ಯೋಜನೆಯನ್ನು ಬೆಂಗಳೂರು ಸ್ಮಾರ್ಟ್ ಸಿಟಿ ಲಿಮಿಟೆಡ್ ಸಂಸ್ಥೆಗೆ ವಹಿಸಲಾಗಿತ್ತು. |

| | | |
|---|---|---|
| | | ಪ್ರಸ್ತುತ ಬಿ.ವಿ.ಕೆ ಅಯ್ಯಂಗಾರ್ ರಸ್ತೆಯನ್ನು ಲೈಟ್ ಟೆಂಡರ್ ಶ್ಯೂರ್ ಮಾದರಿಯಲ್ಲಿ ಅಭಿವೃದ್ಧಿಪಡಿಸಲು ಉದ್ದೇಶಿಸಿದ್ದು, 2022-23ನೇ ಸಾಲಿನಲ್ಲಿ ಕೈಗೊಳ್ಳುವ "ಅಮೃತ ನಗರೋತ್ಥಾನ ಯೋಜನೆ" ಅಡಿಯಲ್ಲಿ ಸೇರ್ಪಡೆಗೊಳಿಸಲು ಕ್ರಮವಹಿಸಲಾಗುತ್ತಿದೆ. |
| ಆ | "ಸ್ಮಾರ್ಟ್ ಸಿಟಿ" ಹಾಗೂ "ಟೆಂಡರ್ ಶ್ಯೂರ್" ಕಾಮಗಾರಿ ಹೆಸರಿನಲ್ಲಿ ಒಳರಸ್ತೆಗಳನ್ನು ಅಗೆಯಲಾಗಿದ್ದು, ಕಾಮಗಾರಿ ಮಾತ್ರ ಪೂರ್ಣಗೊಳ್ಳದೆ ಇರುವುದರಿಂದ ಜನರ ಓಡಾಟಕ್ಕೆ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸದರಿ ಕಾಮಗಾರಿಗಳನ್ನು ಯಾವಾಗ ಪೂರ್ಣಗೊಳಿಸಲಾಗುವುದು; ಈ ರೀತಿ ನಿಧಾನಗತಿಯ ಕಾಮಗಾರಿಗೆ ಕಾರಣಗಳೇನು; | ಸರ್ಕಾರದ ಗಮನಕ್ಕೆ ಬಂದಿದೆ. ಬೆಂಗಳೂರು ನಗರದ 26 ಮುಖ್ಯ ರಸ್ತೆಗಳನ್ನು ಹಾಗೂ ಗಾಂಧಿನಗರ ಪ್ರದೇಶದ 20 ಒಳ ರಸ್ತೆಗಳನ್ನು (ಒಟ್ಟು 31.00 ಕಿ.ಮೀ ಉದ್ದ) ಟೆಂಡರ್ ಶ್ಯೂರ್ ಯೋಜನೆಯಡಿ ಅಭಿವೃದ್ಧಿಪಡಿಸಲು ಕೈಗೆತ್ತಿಕೊಳ್ಳಲಾಗಿದ್ದು, ಈ ಪೈಕಿ 19 ಮುಖ್ಯ ರಸ್ತೆಗಳು ಹಾಗೂ ಗಾಂಧಿನಗರ ಪ್ರದೇಶದ 20 ಒಳ ರಸ್ತೆಗಳ (22.54 ಕಿ.ಮೀ ಉದ್ದ) ಕಾಮಗಾರಿಗಳನ್ನು ಪೂರ್ಣಗೊಳಿಸಲಾಗಿರುತ್ತದೆ.<br><br>ಪ್ರಸ್ತುತ ಸದರಿ ಟೆಂಡರ್ ಶ್ಯೂರ್ ಯೋಜನೆಯಡಿಯಲ್ಲಿ ಮುಖ್ಯ ರಸ್ತೆಗಳಾದ (1) ಸಿದ್ದಯ್ಯ ಪುರಾಣಿಕ ರಸ್ತೆ, (2) ಜಯನಗರ 11ನೇ ಮುಖ್ಯ ರಸ್ತೆ, (3) ಕೆಂಪೇಗೌಡ ರಸ್ತೆ, (4) ಪ್ಯಾಲೇಸ್‌ರಸ್ತೆ, (5) ಗುಬ್ಬಿತೋಟದಪ್ಪರಸ್ತೆ, (6) ಎನ್.ಆರ್ ರಸ್ತೆ ಮತ್ತು (7) ಕಲಾಸಿಪಾಳ್ಯ ಮುಖ್ಯ ರಸ್ತೆಗಳಲ್ಲಿ ಕಾಮಗಾರಿ ಪ್ರಗತಿಯಲ್ಲಿದ್ದು, ಸದರಿ ರಸ್ತೆಗಳಲ್ಲಿ ಜನರ ಓಡಾಟಕ್ಕೆ ಯಾವುದೇ ತೊಂದರೆಯಾಗದಂತೆ ಅಗತ್ಯ ಸುರಕ್ಷಿತ ಕ್ರಮಗಳನ್ನು ಕೈಗೊಂಡು ಕಾಮಗಾರಿ ನಿರ್ವಹಿಸಲಾಗುತ್ತಿದೆ. ಸದರಿ ಕಾಮಗಾರಿಗಳನ್ನು ಜೂನ್-2022 ರ ಅಂತ್ಯಕ್ಕೆ ಪೂರ್ಣಗೊಳಿಸಲು ಕ್ರಮ ವಹಿಸಲಾಗಿರುತ್ತದೆ.<br><br>ಈ ಕೆಳಕಂಡ ಕಾರಣಗಳಿಂದಾಗಿ ಟೆಂಡರ್ ಶ್ಯೂರ್ ಕಾಮಗಾರಿಗಳ ಪ್ರಗತಿಯು ವಿಳಂಬವಾಗಿರುತ್ತದೆ.<br><br>1. ಕಾಮಗಾರಿ ನಿರ್ವಹಿಸಲು ಸಂಚಾರಿ ಪೊಲೀಸ್ ಇಲಾಖೆ ವತಿಯಿಂದ ಹಂತ ಹಂತವಾಗಿ ಅನುಮತಿ ನೀಡಿದ್ದರಿಂದ; |

| | | |
|---|---|---|
| | | 2. ಟೆಂಡರ್ ಶ್ಯೂರ್ ಯೋಜನೆಯಡಿಯಲ್ಲಿ ರಸ್ತೆಯಲ್ಲಿ ಹಾಲಿ ಇರುವ ಎಲ್ಲಾ ಉಪಯುಕ್ತತೆಗಳಾದ ಒಳಚರಂಡಿ ಕೊಳವೆ ಮಾರ್ಗ, ಕುಡಿಯುವ ನೀರಿನ ಕೊಳವೆ ಮಾರ್ಗ, ವಿದ್ಯುತ್ ಸಂಪರ್ಕಗಳನ್ನು ಚಾಲ್ತಿಯಲ್ಲಿಟ್ಟುಕೊಂಡು, ಯಾವುದೇ ಹಾನಿಯಾಗದಂತೆ ಹೊಸದಾಗಿ ಉಪಯುಕ್ತತೆಗಳನ್ನು ಅಳವಡಿಸಿದ ನಂತರ ಜೋಡಣೆ ಮಾಡಲು ಅನುವಾಗುವಂತೆ ಸಂಬಂಧಪಟ್ಟ ಇಲಾಖೆ ಗಳೊಂದಿಗೆ ಸಮನ್ವಯ ಸಾಧಿಸಿಕೊಂಡು ನಿರ್ವಹಿಸಲು ವಿಳಂಬ ಉಂಟಾಗಿರುತ್ತದೆ;<br><br>3. ಪ್ರಸ್ತಾಪಿತ ರಸ್ತೆಗಳಲ್ಲಿ ಅತಿಯಾದ ವಾಹನ ಸಂಚಾರ ದಟ್ಟಣೆ ಮತ್ತು ಪಾದಚಾರಿಗಳ ಸಂಚಾರ ದಟ್ಟಣೆಯಿಂದಾಗಿ ಬಹುತೇಕ ಕಾಮಗಾರಿಗಳನ್ನು ರಾತ್ರಿ ವೇಳೆಯಲ್ಲಿಯೇ ನಿರ್ದಿಷ್ಟ ಸಮಯದಲ್ಲಿಯೇ ನಿರ್ವಹಿಸುವ ಬೇಕಾಗಿದ್ದುದರಿಂದ;<br><br>ಬೆಂಗಳೂರು ಸ್ಮಾರ್ಟ್ ಸಿಟಿ ಲಿಮಿಟೆಡ್ ವತಿಯಿಂದ ಟೆಂಡರ್ ಶ್ಯೂರ್ ಮಾದರಿಯಂತೆ 32 ರಸ್ತೆಗಳನ್ನು ಕೈಗೆತ್ತಿಕೊಳ್ಳಲಾಗಿದ್ದು, 28 ರಸ್ತೆಗಳು ಪೂರ್ಣಗೊಂಡಿರುತ್ತವೆ. ಉಳಿದ ರಸ್ತೆಗಳ ಕಾಮಗಾರಿಗಳನ್ನು ಮಾರ್ಚ್ 2022ರ ಅಂತ್ಯದೊಳಗೆ ಪೂರ್ಣಗೊಳಿಸಲಾಗುವುದು. ಸದರಿ ರಸ್ತೆಗಳ ಕಾಮಗಾರಿಯನ್ನು ಬೆಂಗಳೂರು ವಿದ್ಯುತ್ ಸರಬರಾಜು ನಿಗಮ ನಿಯಮಿತ, ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ, ಬಿ.ಎಸ್.ಎನ್.ಎಲ್, ಕೆ.ಪಿ.ಟಿ.ಸಿ.ಎಲ್ ಹಾಗೂ ಇತರೆ ಇಲಾಖೆಗಳ ಹಾಲಿ ಇರುವ ಸೇವಾ ಉಪಯುಕ್ತತೆಗಳನ್ನು ಉಳಿಸಿಕೊಂಡು ಹೊಸ ಸೇವಾ ಉಪಯುಕ್ತತೆಗಳನ್ನು ಅಳವಡಿಸುವಗ ತೊಂದರೆ ಉದ್ಭವಿಸಿರುತ್ತದೆ. ಈ ಕಾರಣದಿಂದ ಕಾಮಗಾರಿ ಪೂರ್ಣಗೊಳಿಸಲು ವಿಳಂಬವಾಗಿರುತ್ತದೆ. |

| | | |
|---|---|---|
| ಇ | ಪಾದಚಾರಿ ಮಾರ್ಗಗಳ ಅತಿಕ್ರಮಣದಿಂದ ಒಳಚರಂಡಿ ವ್ಯವಸ್ಥೆ ಮತ್ತು ಕುಡಿಯುವ ನೀರಿನಂತಹ ಮೂಲ ಸೌಕರ್ಯಗಳ ನಿರ್ವಹಣೆಗೆ ಕೊರತೆ ಉಂಟಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | ಟೆಂಡರ್ ಶ್ಯೂರ್ ಯೋಜನೆಯಡಿ ಅಭಿವೃದ್ಧಿ ಪಡಿಸಿರುವ ರಸ್ತೆಗಳಲ್ಲಿ ಪಾದಚಾರಿ ಮಾರ್ಗಗಳ ಅತಿಕ್ರಮಣದಿಂದ ಒಳಚರಂಡಿ ವ್ಯವಸ್ಥೆ ಮತ್ತು ಕುಡಿಯುವ ನೀರಿನಂತಹ ಮೂಲ ಸೌಕರ್ಯಗಳ ನಿರ್ವಹಣೆಗೆ ಕೊರತೆ ಉಂಟಾಗಿರುವುದು ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ. |

**ಸಂಖ್ಯೆ: ನಅಇ 107 ಎಂಎನ್‌ವೈ 2022 (ಇ)**

**(ಬಸವರಾಜ ಬೊಮ್ಮಾಯಿ)**
ಮುಖ್ಯಮಂತ್ರಿ